ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತಮೂರನೆಯ ಅಧಿವೇಶನ

ಗುರುವಾರ, ದಿನಾಂಕ: 4ನೇ ಫೆಬ್ರುವರಿ, 2021

ಸರ್ಕಾರಿ ನೌಕರರ ಒಂದು ಇಲಾಖೆಯಿಂದ ಹುದ್ದೆ ಮತ್ತು ವೃಂದ ಬದಲಾವಣೆ ಕುರಿತು

ಶ್ರೀ ಹೆಚ್.ಎಂ. ರಮೇಶ್ ಗೌಡ (ವಿಧಾನಸಭೆಯಿಂದ ಚುನಾಯಿತರಾದವರು) :-

376(411) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಸರ್ಕಾರಿ ಸೇವೆಗೆ ಸೇರಿ ಕಾರ್ಯನಿರ್ವಹಿಸುತ್ತಿರುವ ನೌಕರರು ಒಂದು ಇಲಾಖೆಯಿಂದ ಹುದ್ದೆ ಅಥವಾ ವೃಂದ ಬದಲಾವಣೆ ಮಾಡಿಕೊಂಡು ಅನ್ಯ ಇಲಾಖೆಗೆ ತೆರಳುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಕರ್ನಾಟಕ ನಾಗರಿಕ ಸೇವಾ ನಿಯಮಗಳಲ್ಲಿ ಈ ರೀತಿ ಬದಲಾವಣೆಗಳಿಗೆ ಅವಕಾಶಗಳಿದೆಯೇ; (ನಿಯಮಗಳ ಪೂರ್ಣ ವಿವರಗಳನ್ನು ನೀಡುವುದು)

(ಆ) ಕಳೆದ ಮೂರು ವರ್ಷಗಳಿಂದ ಹುದ್ದೆ ಹಾಗೂ ವೃಂದ ಬದಲಾವಣೆ ಮಾಡಿಕೊಂಡು ಇಲಾಖೆ ಬದಲಾವಣೆ ಮಾಡಿಕೊಂಡಿರುವ ನೌಕರರ ಸಂಖ್ಯೆ ಎಷ್ಟು; (ನೌಕರರ ಹೆಸರಿನೊಂದಿಗೆ ಯಾವ ಇಲಾಖೆಯಿಂದ ಯಾವ ಇಲಾಖೆಗೆ ಬದಲಾವಣೆ ಮಾಡಿಕೊಂಡಿರುತ್ತಾರೆ ಎಂಬ ಪೂರ್ಣ ವಿವರಗಳನ್ನು ನೀಡುವುದು)

(ಇ) ಸರ್ಕಾರಿ ಸೇವೆಗೆ ಸೇರಿದ ನಂತರ ಎಷ್ಟು ಬಾರಿ ಹುದ್ದೆ, ವೃಂದ ಮತ್ತು ಇಲಾಖೆ ಬದಲಾಯಿಸಬಹುದು; ಈ ರೀತಿ ಬದಲಾವಣೆಗೆ ಸಂಬಂಧಿಸಿದಂತೆ ಇರುವ ಮಾನದಂಡಗಳೇನು;

(ಈ) ಪ್ರಸಕ್ತ ಸಾಲಿನಲ್ಲಿ ಹುದ್ದೆ, ವೃಂದ ಮತ್ತು ಇಲಾಖೆ ಬದಲಾಯಿಸಲು ಬಂದಿರುವ ಅರ್ಜಿಗಳು ಎಷ್ಟು; (ಅರ್ಜಿದಾರರ ಹೆಸರಿನೊಂದಿಗೆ ಯಾವ ಇಲಾಖೆಯಿಂದ ಯಾವ ಇಲಾಖೆಗೆ ಬದಲಾವಣೆ ಕೋರಿದ್ದಾರೆ ಎಂಬುದರ ವಿವರಗಳನ್ನು ನೀಡುವುದು) ಈ ಅರ್ಜಿಗಳ ಬಗ್ಗೆ ಅಗತ್ಯ ಕ್ರಮ ಕೈಗೊಳ್ಳಲು ಸರ್ಕಾರ ಯಾವ ರೀತಿ ಕ್ರಮವಹಿಸಿದೆ ?